ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 18 ನೇ ಮಾರ್ಚ್, 2020

ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಅಡಿ ಜಾರಿಗೊಳಿಸಲಾಗುತ್ತಿರುವ ವಸತಿ ಯೋಜನೆಗಳ ಅನುಷ್ಠಾನದ ಬಗ್ಗೆ

ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) :-

1181 (1294) ಮಾನ್ಯ ವಸತಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಮೂಲಕ ವಿವಿಧ ಯೋಜನೆ ಅಡಿಯಲ್ಲಿ ವಸತಿ ರಹಿತ ಬಡವರಿಗೆ ಸೂರು ಒದಗಿಸುವ ಯೋಜನೆಯನ್ನು ಕೇಂದ್ರ ಮತ್ತು ರಾಜ್ಯ ಸಹಾಯಧನದ ಅಡಿಯಲ್ಲಿ ಜಾರಿಗೊಳಿಸಲಾಗುತ್ತಿರುವುದು ನಿಜವೇ ; ಹಾಗಿದ್ದಲ್ಲಿ, ಸಂಪೂರ್ಣ ಮಾಹಿತಿ ನೀಡುವುದು ;

(ಆ) ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದಲ್ಲಿ ಉಂಟಾಗಿರುವ ಆರ್ಥಿಕ ಬಿಕ್ಕಟಿನಿಂದ ಮೇಲ್ಕಂಡ ಯೋಜನೆಗಳ ಅಡಿಯಲ್ಲಿ ಬರುವ ಲಕ್ಷಾಂತರ ಫಲಾನುಭವಿಗಳಿಗೆ ಕಳೆದ ಒಂದು ವರ್ಷದಿಂದ ಸಹಾಯಧನ ಬಿಡುಗಡೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಇ) ನಿಗಮದಿಂದ ಸಹಾಯಧನ ಬಿಡುಗಡೆ ನಿರೀಕ್ಷಣೆಯಲ್ಲಿ ಫಲಾನುಭವಿಗಳು ಸಾಲ ಮಾಡಿಕೊಂಡಿದ್ದು, ತಾವು ವಾಸಿಸುತ್ತಿದ್ದ ಜೋಪಡಿ, ಗುಡಿಸಲುಗಳು ಮತ್ತು ಶೆಡ್ಡುಗಳನ್ನು ಕಿತ್ತು ಹಾಕಿಕೊಂಡು ಬೀದಿ ಪಾಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; (ಸಂಪೂರ್ಣ ಮಾಹಿತಿ ನೀಡುವುದು)

(ಈ) ಈ ಯೋಜನೆಗಳಡಿ ಮೂರು ತಿಂಗಳೊಳಗೆ ಮನೆ ನಿರ್ಮಾಣ ಮಾಡಬೇಕೆಂದು ವಿಧಿಸಿರುವ ಷರತ್ತು ಅಸಂಬದ್ಧವಲ್ಲವೆ ; ಇಂತಹ ಎಷ್ಟು ಪ್ರಕರಣಗಳಲ್ಲಿ ಮನೆ ಹಂಚಿಕೆಯನ್ನು ರದ್ದುಪಡಿಸಲಾಗಿದೆ ; ಹೀಗೆ ರದ್ದುಪಡಿಸಿದ ಮನೆಗಳ ಹಂಚಿಕೆಯನ್ನು ಅದೇ ಗ್ರಾಮಪಂಚಾಯಿತಿ ಅಥವಾ ಅದೇ ತಾಲ್ಲೂಕಿನ ಬೇರೆ ಗ್ರಾಮ ಪಂಚಾಯಿತಿ ಮರು ನಿಗಧಿಪಡಿಸಲಾಗಿದೆಯೇ ; ಅಥವಾ ಬೇರೆ ತಾಲ್ಲೂಕು/ಜಿಲ್ಲೆಗೆ ವರ್ಗಾಯಿಸಲಾಗಿದೆಯೇ ? (ಸಂಪೂರ್ಣ ಮಾಹಿತಿ ನೀಡುವುದು)